ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಚಿಕ್ಕಬಳ್ಳಿ ಕೆರೆಯ ಪಿಕಪ್ ನಾಲೆ ಕುರಿತು

ಶ್ರೀ ಕೆ.ಟಿ. ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ) :-

1220 (1418) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಡ್ಯ ಜಿಲ್ಲೆ ಕೆರೆಗೋಡು ಹೋಬಳಿ ಚಿಕ್ಕಬಳ್ಳಿ ಕೆರೆಯ ಪಿಕಪ್ ನಾಲೆಯ ಅಭಿವೃದ್ಧಿ ಕಾಮಗಾರಿ ಅಂದಾಜಿನಲ್ಲಿ ಗೂಳೂರು ಬೆಟ್ಟದ ಬಳಿ 150 ಮೀ. ಉದ್ದದ ಮೇಲ್ಗಾಲುವೆಯನ್ನು ನಿರ್ಮಿಸುವ ಸಂಬಂಧ ಸಮೀಕ್ಷಾ ಕಾರ್ಯ ಕೈಗೊಂಡು ವಿನ್ಯಾಸ ಹಾಗೂ ಸಾಧ್ಯಾಸಾಧ್ಯತೆ ಬಗ್ಗೆ ಪರಿಶೀಲನೆ ನಡೆಸಲಾಗಿದೆಯೇ ;

(ಆ) ನಡೆಸಿದ್ದಲ್ಲಿ, ಸಮೀಕ್ಷಾ ಕಾರ್ಯ ಹಾಗೂ ಸಾಧ್ಯಾಸಾಧ್ಯತೆಯ ವರದಿಯ ಅಂಶಗಳೇನು ; (ವರದಿಯ ಪ್ರತಿ ಒದಗಿಸುವುದು)

(ಇ) ಸದರಿ ಕಾಮಗಾರಿಯನ್ನು ಯಾವಾಗ ಆರಂಭಿಸಲಾಗುವುದು ; ಯಾವಾಗ ಪೂರ್ಣಗೊಳಿಸಲಾಗುವುದು ; ಕಾಮಗಾರಿ ಪೂರ್ಣಗೊಳಿಸಲು ಕಾಲಮಿತಿ ಹಾಕಿಕೊಳ್ಳಲಾಗಿದೆಯೇ ; ಇದಕ್ಕಾಗಿ ಯಾವ ಸಂಸ್ಥೆಗೆ ಟೆಂಡರ್ ನೀಡಲಾಗಿದೆ ;

(ಈ) ದುಸ್ಥಿತಿಯಲ್ಲಿರುವ ತೂಬುಗಳನ್ನು ದುರಸ್ಥಿಗೊಳಿಸಿ, ಖಾಯಂ ತೂಬುಗಳನ್ನು ಅಳವಡಿಸಲಾಗಿದೆಯೇ; ಹಾಗಿದ್ದಲ್ಲಿ, ಖಾಯಂ ತೂಬುಗಳನ್ನು ಎಲ್ಲೆಲ್ಲಿ ಅಳವಡಿಸಲಾಗಿದೆ ? (ವಿವರ ನೀಡುವುದು)